ಪಿ. ಗಣಪಯ್ಯಭಟ್*

# ಒಲೊಖೊಯಿರ-ಆಳ್ವಖೇಡ: ಒಂದು ಜಿಜ್ಞಾಸೆ

ತುಳುನಾಡಿನ ಇತಿಹಾಸ ಕುರಿತು ಬರೆದ ಬಹುತೇಕ ವಿದ್ವಾಂಸರು ಪರೋಕ್ಷ ಆಧಾರವೊಂದರ ಹಿನ್ನೆಲೆಯಲ್ಲಿ, ಆ ಕುರಿತು ಯಾವುದೇ ಜಿಜ್ಞಾಸೆಯನ್ನು ಕೈಗೊಳ್ಳದೆ, ಕ್ರಿ.ಶ. ಎರಡನೆಯ ಶತಮಾನದಿಂದಲೇ. ತುಳುನಾಡು ಆಳುಪರಸರ ಆಳ್ವಿಕೆಗೊಳಪಟ್ಟಿದ್ದು, 'ಆಳ್ವಖೇಡ' ಎಂಬುದಾಗಿ ಗುರುತಿಸಲಾಗುತ್ತಿತ್ತು. ಎಂಬುದಾಗಿ ತಮ್ಮ ಕೃತಿಗಳಲ್ಲಿ, ಬರಹಗಳಲ್ಲಿ ದಾಖಲಿಸುವ ಮೂಲಕ ಆ ವಿಚಾರವನ್ನು ಒಪ್ಪಿಕೊಂಡಿದ್ದಾರೆ.[1] ಈ ಹೇಳಿಕೆಗಳಿಗೆ ಕ್ರಿ.ಶ. ಎರಡನೆಯ ಶತಮಾನದ ಮಧ್ಯ ಭಾಗಕ್ಕನ್ವಯಿಸುವ ಗ್ರೀಕ್ ಭೂಗೋಳ ಶಾಸ್ತ್ರಜ್ಞ ಟಾಲೆಮಿಯ 'ಭೂಗೋಳ ಶಾಸ್ತ್ರದ ಕೈಪಿಡಿ' ಎಂಬ ಕೃತಿಯಲ್ಲಿ ಕಂಡು ಬರುವ 'ಒಲೊಖೊಯಿರ' ಎಂಬ ಸ್ಥಳದ ಉಲ್ಲೇಖವೇ ಆಧಾರ.[2] ಟಾಲೆಮಿಯ ಒಲೊಖೊಯಿರವು 'ಆಳ್ವಖೇಡ'ದ ಅಪಭ್ರಂಶ ಎಂಬುದು ಈ ವಿದ್ವಾಂಸರ ಅಭಿಪ್ರಾಯ. ಟಾಲೆಮಿಯ 'ಒಲೊಖೊಯಿರ'ವನ್ನು 'ಆಳ್ವಖೇಡ' ದೊಂದಿಗೆ ಸಮೀಕರಿಸುವ ವಿಚಾರ ಎಷ್ಟರ ಮಟ್ಟಿಗೆ ಸ್ವೀಕಾರಾರ್ಹ ಎಂಬುದನ್ನು ಐತಿಹಾಸಿಕ ದಾಖಲೆಗಳ ಹಾಗೂ ಸಾಂದರ್ಭಿಕ ಆಧಾರಗಳ ಹಿನ್ನೆಲೆಯಲ್ಲಿ ಚರ್ಚಿಸುವುದು ಅವಶ್ಯವಾಗಿದೆ.

ಟಾಲೆಮಿಯ ಕೃತಿಯಲ್ಲಿ ಹೇಳಲಾದ ಒಲೊಖೊಯಿರದ ಹಿನ್ನೆಲೆಯನ್ನು ಪರಿಶೀಲಿಸಿದಾಗ ಅದನ್ನು ಆಳ್ವಖೇಡದೊಂದಿಗೆ ಸಮೀಕರಿಸುವಲ್ಲಿ ಪ್ರಥಮ ತೊಡಕು ಎದುರಾಗುತ್ತದೆ. ಭಾರತದ ಪಶ್ಚಿಮ ಪ್ರದೇಶದ ಕಡಲ್ಗಳ್ಳರ ಕೇಂದ್ರಗಳನ್ನು ಪ್ರಸ್ತಾಪಿಸುತ್ತ ಒಲೊಖೊಯಿರವು ಬಳನಾಡಿನಲ್ಲಿರುವ ಕಡಲ್ಗಳ್ಳರ ಒಂದು ಪಟ್ಟಣ ಎಂದು ಇಲ್ಲಿ ಉಲ್ಲೇಖಿಸಲಾಗಿದೆಯೇ ಹೊರತು ಅದೊಂದು ರಾಜಕೀಯ ಪ್ರದೇಶದ ಹೆಸರು ಎಂಬುದಾಗಿ ಅಲ್ಲ. ಒಲೊಖೊಯಿರ ಪಟ್ಟಣದ ಜೊತೆಯಲ್ಲಿ ಕಡಲ್ಗಳ್ಳರ ರಾಜಧಾನಿಯಾದ 'ಮುಸೊಪಲ್ಲಿ' ಎಂಬ ಸ್ಥಳವನ್ನು ಹೆಸರಿಸಲಾಗಿದೆಯಲ್ಲದೆ ಇವೆರಡೂ ಪರಸ್ಪರ ಸಂಬಂಧವಿರುವ ಸ್ಥಳಗಳೆಂಬ ಸೂಚನೆಯೂ ಅಲ್ಲಿ ವ್ಯಕ್ತವಾಗುತ್ತದೆ. ಟಾಲೆಮಿಯ ಕೃತಿಯಲ್ಲಿ ತಿಳಿಸಲಾದಂತೆ ಮುಸೊಪಲ್ಲಿ ಕಡಲ್ಗಳ್ಳರ ರಾಜಧಾನಿ, ಒಲೊಖೊಯಿರವು ಅವರ ಒಂದು ಪಟ್ಟಣ ಎಂಬ ವಿವರಣೆಯಿಂದ ಮುಸೊಪಲ್ಲಿ ಒಲೊಖೊಯಿರಕ್ಕಿಂತಲೂ ಪ್ರಮುಖವಾದ ಸ್ಥಳ ಎಂಬುದು ಸ್ಪಷ್ಟ. ಒಲೊಖೊಯಿರವನ್ನು ಆಳ್ವಖೇಡದೊಂದಿಗೆ ಗುರುತಿಸುವುದಾದಲ್ಲಿ ಮುಸೊಪಲ್ಲಿಯನ್ನು ತುಳುನಾಡಿನ ಯಾವ ಪ್ರದೇಶದೊಂದಿಗೆ

* ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಶ್ರೀ ಧವಲಾ ಕಾಲೇಜು, ಮೂಡುಬಿದಿರೆ (ದ.ಕ.) ೫೭೪೨೨೭

1 ಸಾಲೆತೊರ್ ಬಿ.ಎ., ೧೯೩೬, ಹಿಸ್ಟರಿ ಆಫ್ ತುಳುವ, ಪು. ೫೬ ; ರಮೇಶ್ ಕೆ.ವಿ. ೧೯೬೯, ತುಳುನಾಡಿನ ಇತಿಹಾಸ, ಪು. ೨೫ ; ರಮೇಶ್ ಕೆ.ವಿ. ೧೯೭೦, ಎ ಹಿಸ್ಟರಿ ಆಫ್ ಸೌತ್ ಕೆನರ, (ಎ.ಹಿ.ಸೌ.ಕೆ.) ಪು. ೨೬ ; ಗುರುರಾಜಭಟ್, ಪಿ, ೧೯೭೫, ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್ ಪು. ೧೮ ; ಸೂರ್ಯನಾಥ ಕಾಮತ್, ಯು ,"ಆಳುಪರು" ಕರ್ನಾಟಕದ ಪರಂಪರೆ ಭಾಗ ೧, ರಂ.ರಾ. ದಿವಾಕರ (ಸಂಪಾದಕರು) ಪು. ೩೮೨.

2 ಮೆಕ್ರಿಂಡಲ್, ಜೆ. ಡಬ್ಲ್ಯು, ೧೮೮೪, "ಟಾಲೆಮೀಸ್ ಜಿಯಾಗ್ರಪಿ ಆಫ್ ಇಂಡಿಯಾ ಅಂಡ್ ಸದರ್ನ್ ಏಷ್ಯಾ" ಇಂಡಿಯನ್ ಆಂಟಿಕ್ವೆರಿ ೧೩, (ಪು. ೩೧೩–೪೧೧) ಪು. ೩೬೭.

ಗುರುತಿಸಬೇಕು ? ಒಲೊಖೊಯಿರವನ್ನು ಆಳ್ವಖೇಡ ದೊಂದಿಗೆ ಸಮೀಕರಿಸುವುದನ್ನು ಒಪ್ಪಿದ ವಿದ್ವಾಂಸರು ಅದಕ್ಕೆ ಸಂಬಂಧವುಳ್ಳ ಮುಸೊಪಲ್ಲಿಯ ಕುರಿತು ಗಮನ ಹರಿಸಿಲ್ಲ ಎಂಬುದಿಲ್ಲಿ ಉಲ್ಲೇಖಾರ್ಹ.

ಟಾಲೆಮಿಯ 'ಒಲೊಖೊಯಿರ' ಉಲ್ಲೇಖವನ್ನು ಹೊರತು ಪಡಿಸಿ ಕ್ರಿ.ಶ. ಎರಡನೆಯ ಶತಮಾನದ ಹೊತ್ತಿಗೆ ತುಳುನಾಡು ಆಳುಪರ ಆಳ್ವಿಕೆಯಲ್ಲಿತೆಂಬುದನ್ನು ನಿರೂಪಿಸಲು ಅನ್ಯ ಆಧಾರಗಳೇನಾದರೂ ಇವೆಯೇ ಎಂಬ ಪ್ರಶ್ನೆಗೆ ನಕಾರಾತ್ಮಕ ಉತ್ತರವಷ್ಟೇ ದೊರಕೀತು. ಆಳುಪರ ಕುರಿತಂತೆ ಪ್ರಾಚೀನತಮ ಉಲ್ಲೇಖವಿರುವುದು ಕ್ರಿ. ಶ. ಐದನೆಯ ಶತಮಾನಕ್ಕನ್ವಯಿಸುವ ಹಲ್ಮಿಡಿ ಶಾಸನದಲ್ಲಿ.[3] ಇಲ್ಲಿ ಹೆಸರಿಸಲಾದ 'ಆಳಪಗಣ ಪಶುಪತಿ' ಆಳುಪವಂಶದವನಿರಬೇಕೆಂದೂ, ಆತ ಕದಂಬರ ಸಾಮಂತನಾಗಿದ್ದಿರಬೇಕೆಂದೂ ನಂಬಲಾಗಿದೆ.[4] ಕ್ರಿ.ಶ. ಏಳನೆಯ ಶತಮಾನಾನಂತರದ ಶಾಸನಗಳಲ್ಲಷ್ಟೇ ಆಳುಪ ಅರಸುಮನೆತನದ ನಿರ್ದಿಷ್ಟ ಉಲ್ಲೇಖ ಕಂಡು ಬರುತ್ತದೆ.[5]

ಕ್ರಿಸ್ತಶಕಾರಂಭದ ಎರಡು ಮೂರು ಶತಮಾನಗಳ ತುಳುನಾಡಿನ ಇತಿಹಾಸವನ್ನರಿಯಲು ತಮಿಳು ಸಂಗಮ್ ಸಾಹಿತ್ಯ ಒಂದು ಪ್ರಮುಖ ಆಕರ. ಈ ಕುರಿತು ಡಾ|| ಕೆ.ವಿ. ರಮೇಶ್‌ಅವರ 'ಎ ಹಿಸ್ಟರಿ ಆಫ್ ಸೌತ್ ಕೆನರ' ಕೃತಿಯಲ್ಲಿ ವಿವರವಾಗಿ ಚರ್ಚಿಸಲಾಗಿದೆ.[6] ಸಂಗಮ್ ಸಾಹಿತ್ಯದಲ್ಲಿ ಈ ಪ್ರದೇಶವನ್ನು "ತುಳುನಾಡು" ಎಂಬ ಹೆಸರಿನಿಂದ ಗುರುತಿಸಲಾಗಿದ್ದು ಇಲ್ಲಿ ಕೋಶರ್ ಜನಾಂಗದವರು ವಾಸಿಸುತ್ತಿದ್ದರೆಂಬ ವಿವರಣೆಯಿದೆ. ನಂತರ ಈ ಕೋಶರ್ ಜನಾಂಗದವರನ್ನು ಸದೆ ಬಡಿದು ಇಡಿಯ ತುಳುನಾಡನ್ನು ತನ್ನ ಕೈವಶ ಮಾಡಿ ಕೊಂಡು ಆಳ್ವಿಕೆ ನಡೆಸಿದ ನನ್ನನ್ ಎಂಬ ಹೆಸರಿನ ಅರಸನ ಸಾಹಸಗಾಥೆ ಸಂಗಮ್ ಸಾಹಿತ್ಯದಲ್ಲಿದೆ. ಕೆಲವು ಇತಿಹಾಸಕಾರರ ಅಭಿಪ್ರಾಯದಂತೆ ನನ್ನನ್ ತುಳುನಾಡನ್ನಾಳುತ್ತಿದ್ದುದು ಕ್ರಿ.ಶ. ಎರಡನೇಯ ಶತಮಾನದ ಮಧ್ಯಭಾಗದಲ್ಲಿ[7] ಕ್ರಿ.ಶ. ಒಂದರಿಂದ ಮೂರನೆಯ ಶತಮಾನದ ಮಧ್ಯೆ ಯಾವುದೇ ಕಾಲದಲ್ಲಿ ನನ್ನನ್ ತುಳುನಾಡನ್ನಾಳುತ್ತಿದ್ದಿರಬೇಕೆಂಬುದು ರಮೇಶ್‌ರವರ ಅಭಿಪ್ರಾಯ.[8] ಈ ನನ್ನನ್ ಎಂಬ ಅರಸ ಆಳುಪವಂಶಕ್ಕೆ ಸೇರಿದವನೆಂದು ನಂಬಲು ಯಾವುದೇ ಆಧಾರಗಳಿಲ್ಲ ಎಂಬುದಿಲ್ಲಿ ಗಮನಾರ್ಹ. ಇದರಂತೆ, ಕ್ರಿ.ಶ. ಒಂದರಿಂದ ಮೂರನೆಯ ಶತಮಾನದಲ್ಲಿ ಆಳುಪ ಅರಸುಮನೆತನ ಅಸ್ತಿತ್ವಕ್ಕೆ ಬಂದಿರಲಿಲ್ಲ ಎಂದು ಸ್ಪಷ್ಟವಾಗಿ ತಿಳಿಯಬಹುದು. ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಕ್ರಿ.ಶ. ಎರಡನೆಯ ಶತಮಾನದ ಹೊತ್ತಿಗೆ ತುಳುನಾಡು ಆಳುಪರ ಆಳ್ವಿಕೆಗೊಳಪಟ್ಟಿತ್ತು. ಹಾಗೂ ಅದು ಆಳ್ವಖೇಡ ಎಂಬ ಹೆಸರಿನಿಂದ ಗುರುತಿಸಲಾಗುತ್ತಿತ್ತು ಎನ್ನುವ ವಾದ ಆಧಾರರಹಿತವೆನ್ನಿಸುತ್ತದೆ.

ಈ ಸಂದರ್ಭ ಆಳ್ವಖೇಡ ಎಂಬ ಹೆಸರಿನ ಪ್ರಾಚೀನತೆಯ ಕುರಿತು ವಿಶ್ಲೇಷಿಸುವುದು ಅಗತ್ಯ. ಮೌರ್ಯದೊರೆ ಅಶೋಕನ ಎರಡನೆಯ ಶಿಲಾಶಾಸನದಲ್ಲಿ ಹೇಳಲಾದ "ಸತಿಯ ಪುತ್ರ" ಎಂಬ ಹೆಸರು ತುಳುನಾಡಿಗೆ ಅನ್ವಯಿಸುತ್ತದೆ ಎನ್ನುವ ಕೆಲವು ಚರಿತ್ರಕಾರರ

---

3 ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್ಸ್, ೧೯೩೬, ಪು. ೭೨ ರಿಂದ ಮುಂದಕ್ಕೆ.

4 ರಮೇಶ್ ಕೆ.ವಿ., ೧೯೭೦. ಎ.ಹಿ.ಸೌ.ಕೆ. ಪು. ೨೯.

5 ಇಂಡಿಯನ್ ಆಂಟಿಕ್ವೆರಿ, ೧೯, ಪು. ೯ ರಿಂದ (ಮಹಾಕೂಟ ಸ್ಥಂಭಶಾಸನ) ; ಎಪಿಗ್ರಾಫಿಯಾ ಇಂಡಿಕಾ, ೬, (ಐಹೊಳೆ ಶಾಸನ) ಆಂಧ್ರ ಪ್ರದೇಶ್ ಆರ್ಕಿಯಲಾಜಿಕಲ್ ಸೀರೀಸ್. ೬, ಪು. ೧೧-೩೯, (ಮಾರಟೂರು ಶಾಸನ), ಕೆ.ವಿ. ರಮೇಶ್ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, (೧೯೭೮), ಪು. ೧೦-೧೧ (ವಡ್ಡರ್ಸೆ ಶಾಸನ), ಎಫಿಗ್ರಾಫಿಯಾ ಕರ್ನಾಟಿಕಾ, ೬, ಕೊಪ್ಪ ೩೮, (ಕಿಗ್ಗಶಾಸನ) ಇತ್ಯಾದಿ.

6 ರಮೇಶ್ ಕೆ.ವಿ., ಎ.ಹಿ.ಸೌ.ಕೆ. ಪು. ೧೨-೩೬

7 ಅಯ್ಯಂಗಾರ್ ಎಸ್.ಕೆ. ೧೯೨೩, ಸಮ್ ಕಾಂಟ್ರಿಬ್ಯೂಶನ್ಸ್ ಆಫ್ ಸೌತ್ ಇಂಡಿಯಾ ಟು ಇಂಡಿಯನ್ ಕಲ್ಚರ್, ಪು. ೩೨೩.

8 ರಮೇಶ್ ಕೆ.ವಿ. ಎ.ಹಿ.ಸೌ.ಕೆ. ಪು. ೨೫.

ವಾದವನ್ನೊಪ್ಪುವುದಾದಲ್ಲಿ[9] ಸತಿಯಪುತ್ರ ಎಂಬುದೇ ಈ ಪ್ರದೇಶದ ಪ್ರಾಚೀನತಮ ಹೆಸರು ಎಂದು ತಿಳಿಯಬೇಕಾಗುತ್ತದೆ. ಕ್ರಿಸ್ತಶಕಾರಂಭದ ಪ್ರಥಮ ಮೂರು ಅಥವಾ ನಾಲ್ಕು ಶತಮಾನಗಳಿಗನ್ವಯಿಸಬಹುದಾದ ಸಂಗಮ್ ಸಾಹಿತ್ಯದಲ್ಲಿ ಈ ಪ್ರದೇಶವನ್ನು 'ತುಳು ನಾಡು' ಎಂದು ಗುರುತಿಸಲಾಗಿದೆ.[10] ಮೌರ್ಯರ ರಾಜಕೀಯ ಉತ್ತರಾಧಿಕಾರಿಗಳಾಗಿ ಕರ್ನಾಟಕವೂ ಸೇರಿದಂತೆ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದ ಶಾತವಾಹನರ ದಾಖಲೆಗಳಲ್ಲಿ ತುಳುನಾಡಿನ ಅಥವಾ ಈ ಪ್ರದೇಶದ ಉಲ್ಲೇಖಗಳಿಲ್ಲ. ನಂತರ ಆಳ್ವಿಕೆ ನಡೆಸಿದ ಕದಂಬ ಹಾಗೂ ಬದಾಮಿ ಚಲುಕ್ಯರ ಶಾಸನಗಳಲ್ಲಿ ಆಳುಪ ಅರಸುಮನೆತನದ ಪ್ರಸ್ತಾಪವಿದ್ದರೂ ಆಳ್ವಖೇಡ ಎಂಬ ಹೆಸರಿನ ಉಲ್ಲೇಖ ಕಂಡುಬರುವುದಿಲ್ಲ ಎಂಬುದನ್ನಿಲ್ಲಿ ಗಮನಿಸಬೇಕು.

ಆಳ್ವಖೇಡ ಎಂಬ ಪದದ ಪ್ರಥಮ ಉಲ್ಲೇಖ ದೊರಕುವುದು ಕ್ರಿ.ಶ. ಎಂಟನೆಯ ಶತಮಾನಾಂತ್ಯಕ್ಕನ್ವಯಿಸುವ ರಾಷ್ಟ್ರಕೂಟ ದೊರೆ ಮೂರನೆಯ ಗೋವಿಂದನ ಮಾವಳಿ (ಸೊರಬ ತಾಲ್ಲೂಕು) ಶಾಸನದಲ್ಲಿ.[11] ರಾಷ್ಟ್ರಕೂಟರ ಕಾಲದ ನಿಡುಗುಂದಿ ಶಾಸನದಲ್ಲೂ ಆಳ್ವಖೇಡವನ್ನು ಹೆಸರಿಸಲಾಗಿದೆ. ಈ ಶಾಸನಗಳಂತೆ ಆಳ್ವಖೇಡವು ೬೦೦೦ ವಿಭಾಗಗಳನ್ನೊಳಗೊಂಡ ಪ್ರದೇಶವಾಗಿತ್ತು. ಆಳುಪರಸರ ಆಳ್ವಿಕೆಗೊಳಪಟ್ಟ ನಾಡು ಎಂಬ ಅರ್ಥದಲ್ಲಿ ಆಳ್ವಖೇಡ ಪದವನ್ನು ಬಳಸಲಾಗಿದೆ ಎಂಬುದು ಸ್ಪಷ್ಟ. ಹೊಯ್ಸಳರ ಕಾಲದ ಕೆಲವು ಶಾಸನಗಳೂ ಈ ಪರಂಪರೆಯನ್ನೇ ಮುಂದುವರಿಸಿ ತುಳು ನಾಡನ್ನು ಆಳ್ವಖೇಡ ಎಂದು ಗುರುತಿಸುತ್ತವೆ.[12]

ಈ ಸಂದರ್ಭ ಎರಡು ಮುಖ್ಯವಾದ ವಿಚಾರಗಳನ್ನಿಲ್ಲಿ ಗಮನಿಸಬೇಕು. ೧. ತುಳುನಾಡನ್ನು ಆಳ್ವಖೇಡ ಎಂಬ ಹೆಸರಿನಿಂದ ಗುರುತಿಸುವ ಪ್ರಾಚೀನತಮ ದಾಖಲೆ ಕ್ರಿ.ಶ. ಎಂಟನೇಯ ಶತಮಾನಾಂತ್ಯದ ರಾಷ್ಟ್ರಕೂಟ ಶಾಸನ. ಅದಕ್ಕಿಂತ ಹಿಂದಿನ ಯಾವುದೇ ದಾಖಲೆಗಳಲ್ಲೂ ಆಳ್ವಖೇಡ ಹೆಸರಿನ ಪ್ರಸ್ತಾಪವಿಲ್ಲ. ೨. ತುಳು ನಾಡಿನಲ್ಲಿ ಈತನಕ ಬೆಳಕಿಗೆ ಬಂದಿರುವ ಯಾವುದೇ ಶಾಸನಗಳಲ್ಲೂ ಆಳ್ವಖೇಡ ಪದದ ಉಲ್ಲೇಖವೇ ಕಂಡು ಬರುವುದಿಲ್ಲ. ಈ ಹೆಸರು ತುಳುನಾಡಿನ ಹೊರಗಿರುವ ಶಾಸನಗಳಲ್ಲಿ ಮಾತ್ರ ಕಾಣಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಕ್ರಿ.ಶ. ಎಂಟನೆಯ ಶತಮಾನಕ್ಕೆ ಪೂರ್ವದಲ್ಲಿ ತುಳುನಾಡನ್ನು ಆಳ್ವಖೇಡ ಎಂಬ ಹೆಸರಿನಿಂದ ಗುರುತಿಸಲಾಗುತ್ತಿರಲಿಲ್ಲ ಎಂಬ ಅಂಶ ಖಚಿತವಾಗುತ್ತದೆ. ಕ್ರಿ.ಶ. ಎಂಟನೇಯ ಶತಮಾನದ ಹೊತ್ತಿಗೆ, ಅಂದರೆ, ರಾಷ್ಟ್ರಕೂಟ ಯುಗದಲ್ಲಷ್ಟೆ ಈ ಹೆಸರಿನ ಬಳಕೆ ಆರಂಭವಾಗಿರಬೇಕು. ಆಳ್ವ ಎಂಬುದು ದ್ರಾವಿಡ ಮೂಲದ ಪದ.[13] ಖೇಡ ಎಂಬುದು ಪ್ರಾಕೃತ ಸಂಸ್ಕೃತ ಭಾಷೆಯ ಪದ. 'ಖೇಡ' ಎಂಬುದು ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದಲ್ಲಿ ಬಹಳವಾಗಿ ಬಳಕೆಯಲ್ಲಿರುವ ಸ್ಥಳನಾಮಘಟಕ ಎಂಬುದನ್ನಿಲ್ಲಿ ಗಮನಿಸಬೇಕು. ಈ ಆಧಾರಗಳಂತೆ, ಮಾನ್ಯಖೇಟ ಅಥವಾ ಮಾಳಖೇಡ್‌ನಿಂದ ಆಳ್ವಿಕೆ ನಡೆಸುತ್ತಿದ್ದ ರಾಷ್ಟ್ರಕೂಟರ ಕಾಲದಲ್ಲಿ 'ಆಳುಪರ ಆಳ್ವಿಕೆಯುಳ್ಳ ಪ್ರದೇಶ ಎಂಬ ಅರ್ಥದಲ್ಲಿ ತುಳುನಾಡನ್ನು ಆಳ್ವಖೇಡ ಎಂದು ಗುರುತಿಸುವುದು ರೂಢಿಯಲ್ಲಿ ಬಂದಿರಬೇಕೆಂದು ಊಹಿಸಬಹುದು.

ಟಾಲೆಮಿಯ ಕೃತಿಯಲ್ಲಿ ಹೆಸರಿಸಲಾದ ಸ್ಥಳನಾಮಗಳನ್ನು ನಂತರ ಬಳಕೆಯಲ್ಲಿ ಬಂದ ಅಥವಾ ಆಧುನಿಕ ಸ್ಥಳನಾಮಗಳೊಂದಿಗೆ ಸಮೀಕರಿಸುವ ಮುನ್ನ ಅಂತಹ ಸ್ಥಳನಾಮಗಳ ಪ್ರಾಚೀನತೆಯನ್ನು ನಿರ್ಧರಿಸಬೇಕಾದ್ದು ಅವಶ್ಯ. ಕ್ರಿ.ಶ. ಎರಡನೆಯ ಶತಮಾನದಲ್ಲೇ ಅಂತಹ ಸ್ಥಳನಾಮಗಳು ನಮಗಿಂದು ತಿಳಿದಿರುವ

---

9 ಸ್ಮಿಥ್ ವಿ.ಎ. ಅರ್ಲಿ ಹಿಸ್ಟರಿ ಆಫ್ ಇಂಡಿಯಾ, ಪು. ೩೪೦ ; ರಮೇಶ್ ಕೆ.ವಿ. ಎ.ಹಿ.ಸೌ.ಕೆ. ಪು. ೧೧.

10 ಸಾಲೆತೂರ್, ಹಿಸ್ಟರಿ ಆಫ್ ತುಳುವ, ಪು. ೪೮.

11 ಎಪಿಗ್ರಾಫಿಯಾ ಕರ್ನಾಟಿಕ. ೮, ಸೊರಬ. ೧೦,

12 ಎಪಿಗ್ರಾಫಿಯಾ ಕರ್ನಾಟಿಕ. ೧೨, ತಿಪಟೂರು ೮೧, ಸಂಪುಟ ೫, ಹಾಸನ ೬೯, ಸಂಪುಟ ೫, ಚೆನ್ನರಾಯಪಟ್ಟಣ ೨೬೦, ಇತ್ಯಾದಿ.

13 ರಮೇಶ್ ಕೆ.ವಿ. ಎ.ಹಿ.ಸೌ.ಕೆ. ಪು. ೩೭.

ರೂಪದಲ್ಲೇ ಬಳಕೆಯಲ್ಲಿದ್ದವು ಎಂಬುದು ಖಚಿತವಾದ ನಂತರವಷ್ಟೇ ಅವುಗಳನ್ನು ಟಾಲೆಮಿಯು ಹೆಸರಿಸಿರುವ ಸ್ಥಳನಾಮಗಳೊಂದಿಗೆ ಸಮೀಕರಿಸುವ ಪ್ರಯತ್ನ ಸಾಧ್ಯ. ಟಾಲೆಮಿಯು ಹೆಸರಿಸಿರುವ ಸ್ಥಳನಾಮಗಳೂ ನಾವು ಅವುಗಳೊಂದಿಗೆ ಸಮೀಕರಿಸಲು ಪ್ರಯತ್ನಿಸುವ ಹೆಸರುಗಳೂ ಒಂದೇ ಪ್ರದೇಶಕ್ಕೆ ಅನ್ವಯಿಸುವಂಥವು ಎಂಬುದನ್ನು ಆಧಾರ ಸಹಿತ ನಿರೂಪಿಸಬೇಕಾದ್ದೂ ಅಷ್ಟೇ ಆಗತ್ಯ.[14] ಇನ್ನು, ಟಾಲೆಮಿಯ ಕುರಿತು ಹೇಳುವುದಾದಲ್ಲಿ, ಆತ ಭಾರತವನ್ನೆಂದೂ ಸಂದರ್ಶಿಸಿದವನಲ್ಲ. ಭಾರತದ ಕುರಿತು ಆತನಿಗಿದ್ದುದು ಪ್ರವಾಸಿಗರಿಂದ ಮತ್ತು ವ್ಯಾಪಾರಿಗಳಿಂದ ಸಂಗ್ರಹಿಸಿದ ಪರೋಕ್ಷ ಮಾಹಿತಿ ಮಾತ್ರ ಎಂಬ ಅಂಶವನ್ನೂ ಇಲ್ಲಿ ಗಮನಿಸಬೇಕು. ಈ ಎಲ್ಲ ಹಿನ್ನೆಲೆಯಲ್ಲಿ ಪ್ರಸ್ತುತ ಸಮಸ್ಯೆಯನ್ನು ಸಮಗ್ರವಾಗಿ ವಿಶ್ಲೇಷಿಸಿದಾಗ ಟಾಲೆಮಿಯು ಉಲ್ಲೇಖಿಸಿರುವ ಒಲೊಖೊಯಿರವು ಆಳ್ವಖೇಡ ಖಂಡಿತ ಅಲ್ಲ ಎಂಬ ತೀರ್ಮಾನವನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ.

14 ಯಾವುದೇ ಆಧಾರವನ್ನು ಸೂಚಿಸದೆ ಕೆಲ ವಿದ್ವಾಂಸರು ಒಲೊಖೊಯಿರವನ್ನು ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ಖೇಡ ಎಂಬ ಪಟ್ಟಣದ ಜೊತೆ ಗುರುತಿಸಲು ಪ್ರಯತ್ನಿಸಿದ್ದೂ ಇದೆ. ನೋಡಿ : ಮೆಕ್ರಿಂಡಲ್, ಇಂಡಿಯನ್ ಆಂಟಿಕ್ವೆರಿ, ೧೩, ಪು. ೩೬೭, ನಾಗೇಗೌಡ, ಹೆಚ್.ಎಲ್. ಪ್ರವಾಸಿ ಕಂಡ ಇಂಡಿಯಾ, ಭಾಗ ೧. ಪು. ೧೨೮